# ಎಲ್ಲೆಂದು ನೆಲಸೋಣ? ಯಾರನ್ನು ನಂಬೋಣ?

[ಪಂಚಮ ಪ್ರತಿನಿಧಿಯಿಂದ]

ನಂಜನಗೂಡು ತಾಲ್ಲೂಕು ತಗಡೂರು ಗ್ರಾಮದ ಹರಿಜನ ಜನಾಂಗದಲ್ಲಿ ಸುಮಾರು ಎರಡು ಸಾವಿರ ಜನರಿದ್ದು ಸುಮಾರು 200 ಸಂಸಾರಗಳಿಗೆ ವಾಸಿಸಲು ಮನೆಯಿಲ್ಲದೆ ಬೇರೆಯವರ ಜಗುಲಿಯ ಮೇಲೆ ಮತ್ತು ಇರುವ 5-6 ಅಡಿ ಸ್ಥಳದಲ್ಲೆ ಮುದುರಿಕೊಂಡು ಮಲಗಿ ರಾತ್ರಿಯ ಕಾಲವನ್ನು ಬಹಳ ಕಷ್ಟದಿಂದ ಕಳೆಯುತ್ತಾ ಬರುತ್ತಿರುತ್ತೇವೆ. ಈ ಬಗ್ಗೆ ಮಿರ್ಜಾ ಇಸ್ಮಾಯಿಲ್‌ರವರ ಕಾಲದಿಂದಲೂ ಅಂದರೆ 39 ವರ್ಷಗಳಿಂದಲೂ ಮನೆ ಕಟ್ಟಿಕೊಳ್ಳಲು ಜಾಗ ಮಂಜೂರು ಮಾಡಿಕೊಡಬೇಕೆಂದು ಕೋರಿದ್ದು ಪ್ರಯತ್ನಿಸಿದ್ದು ಈವರೆಗೂ ನಮ್ಮ ಪ್ರಯತ್ನವು ಫಲಿಸದೆ ಉದಾಸೀನವಾಗಿ ಬಿದ್ದಿರುತ್ತದೆ ನಾವು ಎಲ್ಲರಿಗೂ ಅರ್ಜಿ ಕೊಟ್ಟು ಸುಸ್ತಾಗಿದ್ದೇವೆ ಎಂಬುದು ಕಳೆದ ತಿಂಗಳಿಂದ ಸೈಟಿಗಾಗಿ ಹೋರಾಟಕ್ಕಿಳಿದಿರುವ ತಗಡೂರಿನ ಹರಿಜನರ ಅಸಹನೆಯ ಮಾತುಗಳು.

ಹಿಂದೆ ಮಂತ್ರಿಗಳಾಗಿದ್ದ ಎನ್. ರಾಚಯ್ಯನವರಾದಿಯಾಗಿ ಮುಖ್ಯಮಂತ್ರಿ ದೇವರಾಜ ಅರಸು, ಕಂದಾಯ ಸಚಿವ ಬಸವಲಿಂಗಪ್ಪ, ಸ್ಪೀಕರ್ ವೆಂಕಟರಮಣ, ರೇಷ್ಮೆ ಸಚಿವ ಕೆ. ಬಿ. ಶಿವಯ್ಯ, ನಮ್ಮೂರಿನ ಮುಖಂಡ ಟಿ. ವಿ. ಶ್ರೀನಿವಾಸರಾವ್, ತಾಲ್ಲೂಕ್ ಬೋರ್ಡ್ ಅಧ್ಯಕ್ಷ ಪ್ರಸನ್ನಕುಮಾರ್ ಇತ್ಯಾದಿ ಇತ್ಯಾದಿ ಪ್ರಮುಖರನ್ನು ಕಂಡು ಕಂಡು ಕೇಳಿ ಕೇಳಿ ಎಲ್ಲರ ಆಶ್ವಾಸನೆಗಳು ನಮ್ಮ ಮೇಲಿದ್ದೂ ಕೂಡ ನಮ್ಮ ಕೆಲಸ ಆಗದೆ ನಿಂತಿದೆ. ಒಂದು ಸಲ ನಮ್ಮ ಸೈಟಿಗಾಗಿ ಮಂಜೂರಾದ ಜಾಗವು ಹೈಸ್ಕೂಲ್ ಕಟ್ಟಡಕ್ಕೆ ಬೇಕೆಂದು ತಡೆಯಾಯ್ತು. ಇನ್ನೊಂದು ಸಲ ಮಂಜೂರಾದ ಜಾಗವು ಜಾತ್ರೆ ಮಾಳಕ್ಕೆ ಬೇಕೆಂದು ತಡೆಯಾಯಿತು.

**ರಾತ್ರೋ ರಾತ್ರಿ ಕಪ್ಪುಕಲ್ಲು**

ಈಗ ಮಂಜೂರಾಗಿರುವ ಭೂಮಿಗೆ ಒಂದು ಕಡೆ ತಾಲ್ಲೂಕು ಬೋರ್ಡು ಉಪಾಧ್ಯಕ್ಷ ಟಿ. ಎಸ್. ನಾಗರಾಜ್‌ರು ತಾವು ಹರಿಜನರಿಂದ ಕೊಂಡುಕೊಂಡ ಭೂಮಿಗೇ ಸ್ಟೇ ತಂದಿದ್ದರೆ, ಇನ್ನೊಂದು ಕಡೆ ಮೇಸ್ತ್ರಿ ಗುರುಮಲ್ಲಪ್ಪ, ದಳಪತಿ ಬಸವರಾಜ್ ಅದೇ ಮೇಲ್ಕಂಡ ಟಿ. ಎಸ್. ನಾಗರಾಜ್‌ರು ಕೈವಾಡ ಮಾಡಿ ನಮಗಾಗಿರುವ ಸೈಟು ಜಾಗದಲ್ಲಿ ರಾತ್ರೋರಾತ್ರಿ ಕಪ್ಪು ಕಲ್ಲು ನೆಟ್ಟು ದೇವರು ಒಡಮೂಡಿರುವನೆಂದು ಚಪ್ಪರ ಹಾಕಿ ಮೆರವಣಿಗೆ ನಡೆಸಿ ಒಬ್ಬನ ಮೈಮೇಲೆ 'ದೇವರನ್ನೂ ಬರಿಸಿ' ಈ ಜಾಗಕ್ಕೆ ಹರಿಜನರು ಬರಕೂಡದೆಂದು ಹೇಳಿಸಿ ಅಲ್ಲೊಂದು ದೇವಸ್ಥಾನ ಕಟ್ಟಿಸುವ ಪ್ರಯತ್ನ ನಡೆಸಿದ್ದು ಅಧಿಕಾರಿಗಳ ಕ್ರಮದಿಂದ ಅದೇನೊ ಅಷ್ಟಕ್ಕೆ ನಿಂತಿತು.

ಆದರೆ ದೇವರಾದಿಯಾಗಿ ಎಲ್ಲ ಮನುಷ್ಯರೂ ನಮ್ಮನ್ನು ವಂಚಿಸುತ್ತಲೆ ಬಂದಿದ್ದಾರೆ. ಆಫೀಸುಗಳಲ್ಲಿ ನಮ್ಮ ಸೈಟು ಸಂಬಂಧದ ಫೈಲುಗಳೇ

[ಕಡೆಯ ಪುಟ ನೋಡಿ]

ಎಲ್ಲ ಬಗೆಯ ಆರ್ಥಿಕ, ಧಾರ್ಮಿಕ ಸಾಮಾಜಿಕ, ಬೌದ್ಧಿಕ ದಬ್ಬಾಳಿಕೆಯ ವಿರುದ್ಧ ದಲಿತರಲ್ಲಿ ಪ್ರಜ್ಞೆ ಮೂಡಿಸಲು ಯತ್ನಿಸುತ್ತಿರುವ ಪಂಚಮಕ್ಕೆ ಚಂದಾದಾರರಾಗಿರಿ.

ವಾರ್ಷಿಕ ಚಂದಾ 5 ರೂ. ಗಳು.

ಲೇಖನ-ಸುದ್ದಿ ಕಳಿಸುವ ಮೂಲಕ ನೋವುಳ್ಳವರ ನುಡಿಯಾಗಿರುವ ಪಂಚಮವನ್ನು ನಿಮ್ಮ ದನಿಯನ್ನಾಗಿಸಿಕೊಳ್ಳಿ.


# ಪಂಚಮ

ಸಂಪುಟ: 3 ಸಂಚಿಕೆ: 20 20, ನವೆಂಬರ್ 1979 ಪಾಕ್ಷಿಕ ಬೆಲೆ: 20 ಪೈಸೆ


## ತಲದುಮ್ಮನಹಳ್ಳಿ ದಲಿತರಿಗೆ ಸಾಮಾಜಿಕ ಬಹಿಷ್ಕಾರ

[ಪಂಚಮ ಪ್ರತಿನಿಧಿಯಿಂದ]

ಕೋಲಾರ ಜಿಲ್ಲೆಯ ಶಿಡ್ಲಘಟ್ಟ ತಾಲ್ಲೂಕಿನ ತಲದುಮ್ಮನಹಳ್ಳಿಯ ಭೂಹೀನ ಹರಿಜನರಿಗೆ 1975ರಲ್ಲಿ ಸರ್ಕಾರ ಮಂಜೂರು ಮಾಡಿದ ಸುಮಾರು 48 ಎಕರೆ ಗೋಮಾಳ ಹಂಚಿಕೆಗೆ ಸಂಬಂಧಿಸಿದಂತೆ ಆ ಗ್ರಾಮದ ಸವರ್ಣೀಯರು ಕಳೆದ ಎರಡು ತಿಂಗಳಿಂದ ಹರಿಜನರಿಗೆ ಸಾಮಾಜಿಕ ಬಹಿಷ್ಕಾರ ಹಾಕಿದ್ದಾರೆ.

ಸುಮಾರು 160 ಕುಟುಂಬಗಳಿರುವ ಈ ಗ್ರಾಮದಲ್ಲಿ ಹರಿಜನರವು 35 ಕುಟುಂಬಗಳಿವೆ. ಭೂಮಾಲೀಕರ ಪ್ರಭಾವಕ್ಕೊಳಗಾಗಿರುವ ರೆವಿನ್ಯೂ ಅಧಿಕಾರಿಗಳು ಹರಿಜನರಿಗೆ ಮಂಜೂರಾಗಿರುವ ಗೋಮಾಳವನ್ನು ಈವರೆಗೆ ಹಂಚಿಲ್ಲ. ಅಲ್ಲದೆ ಗ್ರಾಮ ಠಾಣೆಗೆ ಸೇರಿದ ಎಂಟು ಎಕರೆ ಭೂಪ್ರದೇಶವನ್ನು ತಮಗೆ ನಿವೇಶನವನ್ನಾಗಿ ಹಂಚಬೇಕೆಂದು ಸರ್ಕಾರವನ್ನು ಹರಿಜನರು ಕೇಳಿಕೊಂಡಿದ್ದರೂ ಅವರಿಗೆ ಊರಿನ ಹೊರಗೆ ದೂರಪ್ರದೇಶದಲ್ಲಿ ನಿವೇಶನ ಮಂಜೂರು ಮಾಡಲಾಗಿದೆ.

ಇಂತಹ ಬೆಳವಣಿಗೆಗಳಿಂದ ಇತ್ತೀಚೆಗೆ ಹರಿಜನರು ಮತ್ತು ಸವರ್ಣೀಯರ ನಡುವೆ ಸಾಮರಸ್ಯ ಕಡಿಮೆಯಾಗಿ ದ್ವೇಷದ ಹೊಗೆ ಎದ್ದಿದೆ. ಗ್ರಾಮದ ವೇಣುಗೋಪಾಲಸ್ವಾಮಿ ದೇವಾಲಯದ ಪೂಜೆ ಸಮಾರಂಭವನ್ನು ಎರಡು ವರ್ಗಗಳು ಈ ವರ್ಷ ಪ್ರತ್ಯೇಕವಾಗಿ ಆಚರಿಸಿದವು.

ಮುಜರಾಯಿ ಇಲಾಖೆಗೆ ಸೇರಿದ ಈ ದೇವಾಲಯಕ್ಕೆ ಕಳೆದ ಅಕ್ಟೋಬರ್ 6 ರಂದು ಹರಿಜನರು ಪ್ರತ್ಯೇಕವಾಗಿ ಪೂಜೆಗೆಂದು ಹೊರಟಾಗ ಅವರನ್ನು ದೇವಾಲಯಕ್ಕೆ ಬಿಡಲಿಲ್ಲ.

**ಕೇರಿಮೇಲೆ ದಾಳಿ-ಕಲ್ಲು**

ಮತ್ತೆ ಅಂದು ರಾತ್ರೋ ರಾತ್ರಿ ಸವರ್ಣೀಯರು ಹರಿಜನರ ಕೇರಿಮೇಲೆ ದಾಳಿ ನಡೆಸಿ ಮನೆಗಳ ಮೇಲೂ ಕಲ್ಲು ತೂರಾಟ ನಡೆಸಿ ಬೆಂಕಿ ಹಚ್ಚುವ ಯತ್ನ ನಡೆಸಿದರು.

[3ನೇ ಪುಟ ನೋಡಿ]

## *THE STRUGGLE OF ALL INDIA CANARA BANK SC/ST EMPLOYEES' ASSOCIATION FOR JUSTICE SCORED AN HISTORIC VICTORY*

Fifth November 1979 has become a memorable day for the SC/ST employees of Canara Bank. It was the day on which they under the auspeces of their newly formed Association, launched their first agitation. It was the day on which the Management showed a willingness to discuss and solve the problems of the SC/ST employees.

The members of the Executive Committee along with members of the Association were observing one day fast and Dharna sitting in front of the Head Office at Bangalore. They came in a procession at 9-45 A.M. with play cards shouting slogans and distributing handbills, explaining the injustice done it the SCs and STs in ignoring all the directives of the Government of India on reservation in appointments and promotions. They stood about half an hour in front of the door of the Head Office protesting against the anti SC/ST attitudes of the Management and Trade Union and then moved into the tent they had put up in front of the Head Office and began their fast and Dharana.

At about 4-30 in the evening the representatives of the Management called our leaders for a discussion on our demands. The President, General Secretary, Joint Secretary, and a member of our Association met them.

During the discussion the Management side agreed to implement the directives issued by the Government of India regarding reservations in appointments and promotions.




On 5th Nov. the office bearers observed Dharna infront of Head Office, Bangalore.

Regarding reservations in internal promotions to Routine Officers cadre Grade IV the Management side assured that they were going to conduct separate test for SC/ST employees and that the selected condidates would be given training.

The representative of our Association brought to the notice of the Management side the spoiling of confidential reports of SC/ST employees by the Managers. The Management side replied that such adverse reports would not be taken serious note of. When the representatives argued for conducting enquiries whenever such adverse reports are made the Management side said that they would take up the matter with the Divisional Managers.

The Association had planned for a token one-day fast and Dharana (1) to protest against the anti-SC/ST attitude of the Management and the Trade Union and (2) to force the Management to implement the directives of the Government of India. On the assurances given by the Management the Association decided to withdraw their agitation. The fast and Dharana were called off at 6 P. M.

The Management and Trade Union probably that they could continue to suppress and silence the SCs and STs and perpetuate inequality and discrimination for ever. They have never been more wrong. The fire lit by Dr. B. R. Ambedkar can never be extingished until and unless justice is done to the SCs and STs.

SC/ST EMPLOYEES UNITY ZINDABAD

EXECUTIVE COMMITTEE
ALL INDIA CANARA BANK SC/ST EMPLOYEES ASSOCIATION

3rd Main,
Gangenahally,
Near HGN School Hebbal,
Bangalore-560 006.

# ದಲಿತ ನುಡಿ

ದಲಿತ ಯುವಕರೇ ಒಗ್ಗಟ್ಟಾಗಿ!
ಅಸ್ಪೃಶ್ಯತೆ, ಜಾತಿ ವ್ಯವಸ್ಥೆ, ಬಂಡವಾಳಶಾಹಿ ವ್ಯವಸ್ಥೆ, ಅನ್ಯಾಯ, ಅಕ್ರಮ, ಭ್ರಷ್ಟಾಚಾರಗಳ ವಿರುದ್ಧ ಹೋರಾಟ ಘೋಷಿಸಿ! ಇನ್ನು ಎಂದಿಗೂ ಮತ್ತೆ ಅನ್ಯಾಯಕ್ಕೊಳಗಾಗದಿರಲು ಪ್ರತಿಜ್ಞೆ ಮಾಡಿ.

—ಬೋಯಿಭೀಮನ್ನ

---

## ಸಾಮಾಜಿಕ ಬಹಿಷ್ಕಾರ

[ಒಂದನೇ ಪುಟದಿಂದ]

ಇದಾದ ನಂತರ ಸವರ್ಣೀಯ ಪ್ರಮುಖರು ಒಂದು ದಿನ ಪಂಚಾಯಿತಿ ಸೇರಿ ಹರಿಜನರಿಗೆ ಸಾರ್ವಜನಿಕ ಕೆರೆ-ಬಾವಿಗಳಲ್ಲಿ ನೀರು ತೆಗೆಸಬಾರದು, ಕೂಲಿಗೆ ಕರೆಯಬಾರದು ಮತ್ತು ಅಂಗಡಿಗಳಲ್ಲಿ ಸಾಮಾನುಗಳನ್ನು ನೀಡಬಾರದೆಂದು ಸಾಮಾಜಿಕ ಬಹಿಷ್ಕಾರ ಹಾಕಿದರು. ಈ ಆಜ್ಞೆಯನ್ನು ಉಲ್ಲಂಘಿಸಿದ ಎರಡು ವರ್ಗಗಳಿಗೂ ದಂಡವಿಧಿಸುವುದಾಗಿಯೂ ಎಚ್ಚರಿಕೆ ನೀಡಿದ್ದು,

**ಕಣ್ಣೀರಿಟ್ಟರು**

ಸಾಮಾಜಿಕ ಬಹಿಷ್ಕಾರ ಇನ್ನೂ ಮುಂದುವರೆದಿದ್ದು ಹರಿಜನರ ಬದುಕೇ ದುಸ್ತರವಾಗಿದೆ.

ಈ ಸಂಬಂಧದಲ್ಲಿ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ಇತ್ತೀಚೆಗೆ ಗ್ರಾಮಕ್ಕೆ ಭೇಟಿ ನೀಡಿದಾಗ ನೊಂದ ಹರಿಜನರು ತಮ್ಮ ಗೋಳನ್ನು ಕಣ್ಣೀರಿಟ್ಟು ತೋಡಿಕೊಂಡರು.

ಈ ಎಲ್ಲಾ ಘಟನೆಗಳ ಬಗ್ಗೆ ಹರಿಜನರು ಚಿಂತಾಮಣಿಯ ಸರ್ಕಲ್ ಇನ್ಸ್‌ಪೆಕ್ಟರಿಗೆ ದೂರು ನೀಡಿದರೂ (ತಲದುಮ್ಮನಹಳ್ಳಿ ಚಿಂತಾಮಣಿ ವ್ಯಾಪ್ತಿಗೆ ಸೇರಿದುದು) ಕಿರುಕುಳ ಕೊಡುತ್ತಿರುವ ಶೋಷಕ ಸವರ್ಣೀಯರ ವಿರುದ್ಧ ಯಾವ ಕ್ರಮವನ್ನು ಕೈಗೊಂಡಿಲ್ಲದಿದ್ದು, ಹರಿಜನರಿಗೆ ರಕ್ಷಣೆ ನೀಡುವಲ್ಲಿ ವಿಫಲರಾಗಿದ್ದಾರೆ.

ತಲದುಮ್ಮನಹಳ್ಳಿ ಹರಿಜನರಿಗೆ ಮಂಜೂರಾಗಿರುವ ಗೋಮಾಳವನ್ನು ಮತ್ತು ಗ್ರಾಮಠಾಣೆಯಲ್ಲೇ ನಿವೇಶನವನ್ನು ಈ ಕೂಡಲೇ ಹಂಚಬೇಕೆಂದು ಹಾಗೂ ಸಾಮಾಜಿಕ ಬಹಿಷ್ಕಾರವಿಧಿಸಿರುವವರ ವಿರುದ್ಧ ಸೂಕ್ತ ಕ್ರಮತೆಗೆದುಕೊಳ್ಳಬೇಕೆಂದು ದ. ಸಂ. ಸ. ಅಂತರ ರಾಜ್ಯ ಸಂಚಾಲಕ ಓ. ಶ್ರೀಧರನ್ ಮತ್ತು ಕೋಲಾರ ಜಿಲ್ಲಾ ಘಟಕದ ಸಂಚಾಲಕ, ಸಿ. ಎಂ. ಮುನಿಯಪ್ಪ ಅವರು ಸರ್ಕಾರವನ್ನು ಒತ್ತಾಯಿಸಿದ್ದಾರೆ.

## ಭೂಮಿ ಕೊಡಿಸುವುದಾಗಿ ದಲಿತ ಮಹಿಳೆಗೆ ವಂಚನೆ

ಮಳವಳ್ಳಿ ತಾಲ್ಲೂಕು ಅಭಿವೃದ್ಧಿ ಮಂಡಲಿಯ ದಲಿತವರ್ಗದ ಸದಸ್ಯ ದೊಡ್ಡಲಿಂಗಯ್ಯ ಎಂಬಾತನು ಹರಿಜನರನ್ನೇ ವಂಚಿಸುವ ಕೃತ್ಯದಲ್ಲಿ ತೊಡಗಿದ್ದಾನೆಂದು ವರದಿಯಾಗಿದೆ.

ದುಗ್ಗನಹಳ್ಳಿ ಗ್ರಾಮದ ಈತ ಅದೇ ಗ್ರಾಮದ ದಲಿತವರ್ಗದ ಮಾಯಮ್ಮ ಎಂಬಾಕೆಗೆ ಜಮೀನು ಮಂಜೂರು ಮಾಡಿಸಿಕೊಡುವುದಾಗಿ ಆಕೆಯಿಂದ 400 ರೂ. ಗಳನ್ನು ಪಡೆದು ವಂಚಿಸಿರುತ್ತಾನೆಂದು ತಿಳಿದುಬಂದಿದೆ.

ಮಾಯಮ್ಮನ ಹೆಸರಿನಲ್ಲಿ ಮಂಜೂರಾಗಬೇಕಾಗಿದ್ದ ಜಮೀನನ್ನು ದೊಡ್ಡಲಿಂಗಯ್ಯ ತನ್ನ ಕುಟುಂಬದವರ ಹೆಸರಿಗೆ ಮಂಜೂರು ಮಾಡಿಸಿಕೊಂಡಿರುತ್ತಾನೆಂದು ಹೇಳಲಾಗಿದೆ.

ಈ ಅನ್ಯಾಯಕ್ಕೆ ಸಂಬಂಧಿಸಿದಂತೆ ಉಂಟಾದ ವೈಷಮ್ಯದಿಂದ ದೊಡ್ಡಲಿಂಗಯ್ಯನು ಮಾಯಮ್ಮನ ಹುಲ್ಲುಮೆದೆಗೆ ಇತ್ತೀಚೆಗೆ ಬೆಂಕಿ ಹಚ್ಚಿಸಿದನೆಂದು ಆರೋಪಿಸಲಾಗಿದೆ.

ಈ ಸಂಬಂಧದಲ್ಲಿ ಆರೋಪಿಯ ವಿರುದ್ಧ ಸ್ಥಳೀಯ ಪೋಲೀಸರು ಯಾವ ಕ್ರಮವನ್ನು ತೆಗೆದುಕೊಂಡಿಲ್ಲವೆಂದು ಹೇಳಲಾಗಿದೆ.

## ದ. ಸಂ. ಸ. ಕಾರ್ಯಕರ್ತ ಗೋಪಾಲಸ್ವಾಮಿ ನಿಧನ

ದಲಿತ ಸಂಘರ್ಷ ಸಮಿತಿಯ ಹೋರಾಟದ ಮೂಲಕ ತನ್ನ ಜನರ ವಿಮೋಚನೆಯ ಆಸೆಇಟ್ಟುಕೊಂಡಿದ್ದ ದ. ಸಂ. ಸ. ಶಿವಮೊಗ್ಗ ಜಿಲ್ಲಾ ಸಂಚಾಲಕರಾಗಿದ್ದ ಗೋಪಾಲಸ್ವಾಮಿ ಇನ್ನಿಲ್ಲ. ಅನಾರೋಗ್ಯನಿಮಿತ್ತ ಅವರು ಅಕ್ಟೋಬರ್ 20 ರಂದು ನಿಧನರಾದರು.

ದಲಿತರ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಅವರ ನೋವಿಗೆ ಮರುದನಿ ನೀಡುತ್ತಿದ್ದ ಗೋಪಾಲಸ್ವಾಮಿ ಪ್ರಗತಿಪರ ಚಿಂತಕರೂ, ಸಕ್ರಿಯ ಕಾರ್ಯಕರ್ತರೂ ಆಗಿದ್ದರು. ಎಂ. ಎ. ವ್ಯಾಸಂಗ ಮಾಡುತ್ತಿದ್ದ ಅವರು ಶಿವಗಂಗೋತ್ರಿಯಲ್ಲಿ ದ. ಸಂ. ಸ. ವಿದ್ಯಾರ್ಥಿ ಶಾಖೆ ಕಟ್ಟುವ ಯತ್ನ ನಡೆಸಿದ್ದರು.

ಶಿವಮೊಗ್ಗ ತಾಲ್ಲೂಕಿನ ಪಿಳ್ಳಂಗಿರಿ ಗ್ರಾಮದ ದಲಿತರ ಭೂಮಿ ವಿವಾದ ಮತ್ತು ವಿದ್ಯಾರ್ಥಿಗಳ ಸಮಸ್ಯೆಗಳ ಬಗ್ಗೆ ಅವರು ನಡೆಸಿದ ಹೋರಾಟ ನೆನೆಯುವಂತಹದ್ದು.

ದಿವಂಗತ ಗೋಪಾಲಸ್ವಾಮಿಯವರ ಅಂತ್ಯಕ್ರಿಯೆಯಲ್ಲಿ ದ. ಸಂ. ಸ ರಾಜ್ಯ ಸಂಚಾಲಕ ಬಿ. ಕೃಷ್ಣಪ್ಪ ಮುಂತಾದ ನೂರಾರು ಮಂದಿ ಕಾರ್ಯಕರ್ತರು ಭಾಗವಹಿಸಿ ತಮ್ಮ ಅಂತಿಮ ಗೌರವ ಸಲ್ಲಿಸಿದರು.

---

**ಸೂಚನೆ**

ಪ್ರಿಯರೆ,

ಕಳೆದ ಎರಡು ಸಂಚಿಕೆಗಳಿಂದ ಪ್ರಕಟಿಸಲಾಗುತ್ತಿದ್ದ "ರಾಷ್ಟ್ರಸಮಾಜವಾದದ ಬಗೆಗೆ ಡಾ. ಬಿ. ಆರ್. ಅಂಬೇಡ್ಕರ್ ವಿಶ್ಲೇಷಣೆ" ಎಂಬ ಲೇಖನದ ಧಾರವಾಹಿಯನ್ನು ಈ ಸಂಚಿಕೆಯಲ್ಲಿ ಕೆಲವು ಅನಿವಾರ್ಯ ಕಾರಣಗಳಿಂದ ಪ್ರಕಟಿಸಲಾಗಲಿಲ್ಲ. ಮುಂದಿನ ಸಂಚಿಕೆಯಿಂದ ಅದನ್ನು ಮುಂದುವರಿಸುತ್ತೇವೆ.

—ಸಂಪಾದಕ

---

## ಜಾತಿ : ಒಂದು ಅನುಭವ

ನಾನು ಮೈಸೂರು ಮಹಾರಾಣಿ ಕಾಲೇಜಿನಲ್ಲಿ ಎರಡನೇ ಪಿ.ಯು.ಸಿ. ಯಲ್ಲಿ ವ್ಯಾಸಂಗ ಮಾಡುತ್ತಿದ್ದು ಮಹಾರಾಣಿ ಕಾಲೇಜು ಹಾಸ್ಟೆಲಿನಲ್ಲಿದ್ದೇನೆ. ಆ ದಿನ ಭಾನುವಾರ. ಬೆಳಿಗ್ಗೆ ಸ್ನಾನ ಮಾಡಿ ಹಾಸ್ಟಲಿನ ಆವರಣದಲ್ಲಿ ಬಿಸಿಲಿನಲ್ಲಿ ತಲೆ ಒಣಗಿಸಿಕೊಂಡು ನನ್ನ ರೂಮಿನತ್ತ ಬರುತ್ತಿದ್ದೆ. ಆವರಣದಲ್ಲೆಲ್ಲ ಹುಡುಗಿಯರು ಇದ್ದರು. ಹಾಸ್ಟೆಲಿನಲ್ಲಿರುವ ಕೆಲಸಗಾತಿ (ಲಿಂಗಾಯಿತರವಳು; ಹಣೆಯಲ್ಲಿ ಸದಾ ವಿಭೂತಿ-ಗಂಧ ಇದ್ದೆ ಇದೆ) ನನ್ನನ್ನು ನೋಡಿ ಏನನಿಸಿತೋ ಏನೋ "ನೀನು ಯಾವ ಜಾತಿಯಮ್ಮ" ಎಂದಳು. ಆಕೆಯ ಅನಿರೀಕ್ಷಿತ ಪ್ರಶ್ನೆಗೆ ಕಸಿವಿಸಿ ಎನಿಸಿದರೂ ಥಟ್ಕನೆ "ನಾನು ಹೊಲೆಯರವಳು ಕಣಮ್ಮ" ಎಂದೆ. ಅದಕ್ಕೆ "ಅಯ್ಯೊ ಪಾಪ" ಎಂದಳು. ನಾನು "ಯಾಕೆ ಪಾಪ ಅಂತೀರಿ" ಅಂದೆ. ಅಲ್ಲಮ್ಮ ನೀನಾದ್ರೂ ಜಾತಿ ಹೇಳ್ತೀಯಲ್ಲ; ನಿಮ್ ಜಾತಿಯವರು ಯಾರೂ ಹೀಗೆ ಹೇಳಿಕೊಳ್ಳುವುದಿಲ್ಲ" ಅಂದಳು. ನಾನು ನಸುನಕ್ಕು ಮೌನವಾಗಿ ರೂಮಿನತ್ತ ನಡೆದೆ. ಆದರೆ ಆಯಮ್ಮ ನನ್ನನ್ನೇ ಒಂದು ರೀತಿಯ ಕನಿಕರದಿಂದಲೋ ಮತ್ತಾವ ದೃಷ್ಟಿಯಿಂದಲೋ ನೋಡುತ್ತಲೇ ಇದ್ದಳು.

—ಹೆಬ್ಬಾಳೆ ಚಿನ್ನಮ್ಮ
ಮೈಸೂರು.

# ಹರಮುಘಟ್ಟ ದಲಿತರಿಗೆ ಪಿತ್ರಾರ್ಜಿತ ನಿವೇಶನ ದೊರೆಯಲಿ

[ವರದಿ : ಎನ್. ಗಿರಿಯಪ್ಪ]

ಶಿವಮೊಗ್ಗಕ್ಕೆ 12 ಮೈಲಿ ದೂರದ ಹರಮುಘಟ್ಟ ಗ್ರಾಮದಲ್ಲಿ ಸುಮಾರು 60 ದಲಿತರ ಮನೆಗಳಿವೆ. ಆ ದಲಿತರೆಲ್ಲ ಈಗ ಊರಾಚೆ ವಾಸಿಸಬೇಕಾಗಿದೆ. ಈಗ್ಗೆ 15 ವರ್ಷಗಳ ಹಿಂದೆ ಅವರೆಲ್ಲರ ಮನೆಗಳು ಊರ ಒಳಗೇ ಇದ್ದವು. ತಾತ ಮುತ್ತಾತರ ಕಾಲದಿಂದಲೂ ಅವರು ಅಲ್ಲೇ ವಾಸವಾಗಿದ್ದರು. ಎಲ್ಲರ ಮನೆಗಳು ಜೋಪಡಿಗಳಾಗಿದ್ದರಿಂದ ಒಂದೆರಡು ಬಾರಿ ಇವುಗಳಿಗೆ ಬೆಂಕಿ ಬಿದ್ದು ಭಸ್ಮವಾದವು.

1965 ರಲ್ಲಿ ದಲಿತರ ಜೋಪಡಿಗಳಿಗೆ ಮತ್ತೊಮ್ಮೆ ಬೆಂಕಿ ಬಿತ್ತು. ಆಗಾಗ್ಗೆ ಇಂತಹ ಬೆಂಕಿ ಅಪಘಾತಗಳನ್ನು ದಲಿತರು ಎದುರಿಸಬೇಕಾಯಿತು. ಅಕ್ಕಪಕ್ಕದಲ್ಲಿದ್ದ ಸವರ್ಣೀಯರು "ನೀವು ಊರಿನ ಒಳಗೆ ಇರಬೇಡಿ" ಎಂದು ಹೆದರಿಸಿ-ಗದರಿಸಿ ದಲಿತರನ್ನು ಊರಾಚೆ ಅಟ್ಟಿದರು. ಅನ್ಯಮಾರ್ಗವಿಲ್ಲದೆ ದಲಿತರು ತಮ್ಮ ಪಿತ್ರಾರ್ಜಿತ ಜಾಗಗಳಿಂದ ದೂರ ಉಳಿದರು.

ದಲಿತರ ಪಿತ್ರಾರ್ಜಿತ ಜಾಗ ಸುಮಾರು ಎರಡು ಎಕರೆಗೂ ಹೆಚ್ಚಿನದು. 15 ವರ್ಷಗಳಿಂದ ಪಾಳುಬಿದ್ದಿದ್ದ ಈ ಜಾಗವನ್ನು ಆಕ್ರಮಿಸಿಕೊಳ್ಳಲು ಪಂಚಾಯಿತಿಯವರು ಸಂಚು ಹೂಡಿದರು. ಅಂತಯೇ ಅನೇಕ ಪಂಚಾಯಿತಿ ಸದಸ್ಯರು ಈ ಜಾಗ ಪಂಚಾಯಿತಿಗೆ ಸೇರಿದುದು ಎಂದು ಸುಮಾರು 15 ಸಾವಿರ ರೂ. ಗಳ ಲಂಚಪಡೆದು ಸವರ್ಣೀಯರಿಗೆ ಕೆಲವು ಸೈಟುಗಳನ್ನು ಮಾರಾಟ ಮಾಡಿದ್ದಾರೆ. ಸೈಟು ಪಡೆದ ಮೂವರು ಆ ಜಾಗದಲ್ಲಿ ಈಗ ಮೂರು ಹೊಗೆಸೊಪ್ಪಿನ ಬ್ಯಾರಲ್‌ಗಳನ್ನು ಕಟ್ಟಿಸಿಕೊಂಡಿದ್ದಾರೆ.

ಆ ಜಾಗವು ದಲಿತರಿಗೆ ಸೇರಿದೆ ಎನ್ನಲು ಅವರಲ್ಲಿ ಎಲ್ಲಾ ಹಕ್ಕುಪತ್ರಗಳು ಕಂದಾಯದ ರಸೀದಿಗಳಿವೆ. ಮೇಲಾಗಿ ಇನ್ನೂ ಆ ಜಾಗದಲ್ಲಿ ದಲಿತರ ದೇವತೆ ದುರುಗಮ್ಮನ ಗುಡಿ ಇದೆ.

## ಹುಣಸೂರು ಪೋಲೀಸರು : ನೀವೂ ನಗಿರಿ

ಇತ್ತೀಚೆಗೆ ಹುಣಸೂರು ತಾಲ್ಲೂಕು ಹನುಮಂತಪುರದ ಭೋವಿ ಜನಾಂಗದ ರೈತರ ಮೇಲೆ ಭೂಮಾಲಿಕರು ಹಲ್ಲೆ ನಡೆಸಿದರು. ಪೋಲಿಸರನ್ನು ಒಳಾಕಿಕೊಂಡು ಜಮೀನ್ದಾರರು ಭೋವಿ ಜನಾಂಗದವರು ಕಾಡುಕಡಿದು ನೆಲ ಸಮಮಾಡಿ ಉಳುಮೆ ಮಾಡುತ್ತಿದ್ದ ಭೂಮಿಯನ್ನು ಆಕ್ರಮಿಸಲು ಯತ್ನಿಸಿದೆಲ್ಲವನ್ನು ಪತ್ರಿಕೆಗಳು ಪ್ರಕಟಿಸಿದವು. ಜಮೀನ್ದಾರರು ಪೋಲೀಸರ ಸಂಚು ಬಹಿರಂಗವಾದಾಗ ಅವರೆಲ್ಲರೂ ಸ್ವಲ್ಪ ಗಲಿಬಿಲಿಯಾದರು. ಜಮೀನ್ದಾರರು ಭೋವಿ ಜನಾಂಗದವರ ಮೇಲೆ ನೇರ ಹಲ್ಲೆಯನ್ನು ಬಿಟ್ಟು ಕುತಂತ್ರ ಅನುಸರಿಸಲು ತೊಡಗಿದರು. ಉದಾಹರಣೆಗೆ ಜಮೀನ್ದಾರರು ತಮ್ಮ ಬಾಳೆಯ ತೋಟವನ್ನು ತಾವೇ ಕತ್ತರಿಸಿದಾಗ ಭೋವಿ ಜನಾಂಗದವರುಮೇಲೆ ಮೇಲೆ ಪೋಲಿಸು ಕಂಪ್ಲೇಟು ಕೊಟ್ಟರು. ಪೋಲಿಸರು ಧಾವಿಸಿ ಸ್ಥಳಕ್ಕೆ ಬಂದು ಕತ್ತರಿಸಿದ ಬಾಳೆಗಿಡ ಕಂದುಗಳನ್ನು ಟೇಪಿನಲ್ಲಿ ಅಳತೆ ಮಾಡುತ್ತಿದ್ದರಂತೆ! ಪೋಲಿಸರ ಈ ತಮಾಷೆ ಕಂಡು ರೇಗಿದ ಎಸ್. ಪಿ. ಯವರು ಮನುಷ್ಯರನ್ನು ಕತ್ತರಿಸಿದರೆ ಸುಮ್ಮನಿರ್ತೀರಿ. ಬಾಳೆಗಿಡಗಳನ್ನು ಕತ್ತರಿಸಿದರೆ ಮುತುವರ್ಜಿ ವಹಿಸ್ತೀರಾ ?' ಎಂದು ಕುಪಿತಗೊಂಡರಂತೆ. ಈ ಹಿಂದೆ ಇದೇ ಜಮೀನ್ದಾರರು ಇದೇ ಭೋವಿ ಜನಾಂಗದವರ ಮೇಲೆ ಹಲ್ಲೆ ನಡೆಸಿದಾಗ ಪೋಲಿಸರು ಆ ಸಂಗತಿಗಳನ್ನೆ ಇಲ್ಲಿ ನೆನಪಿಸಿಕೊಳ್ಳಬಹುದು.

# ಎಲ್ಲೆಂದು ನೆಲಸೋಣ ? ಯಾರನ್ನು ನಂಬೋಣ ?

[ಒಂದನೇ ಪುಟದಿಂದ]

ನಾಪತ್ತೆಯಾಗಿವೆ. ಒಟ್ಟಿನಲ್ಲಿ ನಾಕಾಕಡೆಗಳಿಂದಲೂ ನಮಗೆ ವಂಚನೆಗಳಾಗುತ್ತಿರುವುದರಿಂದ ಕೊನೆಗೆ ಸತ್ತ ಮೇಲಾದರೂ 6 ಅಡಿ 3 ಅಡಿ ಅಳತೆ ಮಟ್ಟ ಜಾಗವಾದರೂ ನಮ್ಮ ಶವಗಳನ್ನು ಊಳಲು ಯಾವ ತಂಟೆತಕರಾರಿಗೆ ಬರುವುದಿಲ್ಲವೆಂದು ತಿಳಿದು 17-10-79 ರಿಂದ ಸರದಿ ಉಪವಾಸ ಸತ್ಯಾಗ್ರಹ ಆರಂಭಿಸಿದ್ದೇವೆ.

### ಕೊಟ್ಟ ಮಾತು ನಡೆಯಲಿಲ್ಲ

ಕನ್ನಡ ರಾಜೋತ್ಸವದಂದು ಭೇಟಿ ನೀಡಿದ ಸ್ಪೀಕರ್ ವೆಂಕಟರಮಣ, ಸಚಿವ ಕೆ. ಬಿ. ಶಿವಯ್ಯನವರು ಇನ್ನೊಂದು ವಾರದೊಳಗಾಗಿ ಮಾಡಿಕೊಡುವುದಾಗಿ ಮಾತುಕೊಟ್ಟರು. ಮಾತು ನಡೆಯಲಿಲ್ಲ. ವಾರ ನಮ್ಮ ಕಣ್ಣೆದುರೇ ನಮ್ಮನ್ನು ಗೇಲಿಮಾಡುತ್ತಾ ಕಳೆದುಹೋಯಿತು. ಜಿಲ್ಲಾಧಿಕಾರಿ ಎಸ್. ಆರ್. ವಿಜಯ್‌ರವರು ಡಿಸೆಂಬರ್ 15ರ ಒಳಗಾಗಿ ಮಾಡಿಕೊಡುವುದಾಗಿ ಮಾತು ಕೊಟ್ಟಿರುವರು. ಇನ್ನೂ ಕಾಲವಿರುವುದರಿಂದ ಈ ಮಾತಾದರೂ ನಡೆಯುಬಹುದೆಂದು ಆಸೆ ಇಡುದುಕೊಂಡು ಕುಳಿತಿದ್ದೇವೆ.

ರಾಜ್ಯಕ್ಕೆ ನಾಯಕರಾದವರು ನಮ್ಮ ತಾಲ್ಲೂಕಿನಲ್ಲೇ ಇರುವುದರಿಂದ ಅವರೆಲ್ಲ ಮನಸ್ಸುಪಟ್ಟರೆ ಇಂದೇ ಈ ಕೆಲಸವಾಗಬಹುದು. ಈ ಆಸೆಯೂ ನಮಗೆ ಇನ್ನೂ ಉಳಿದಿದೆ. ಜೊತೆಗೆ ನಮ್ಮ ಗೋಳು ಸಂಕಟಗಳು ಮುಖ್ಯಮಂತ್ರಿಗಳನ್ನು ಮುಟ್ಟಿ ಅವರು ಮನಸ್ಸುಮಾಡಿ ನಮ್ಮಂಥ ವಂಚಿತ ಜನರ ಸಲುವಾಗಿ ಸುಗ್ರೀವಾಜ್ಞೆ ತರಬಹುದೆಂಬ ಆಸೆಯೂ ನಮಗಿದೆ.

### ಚಳುವಳಿ ವಿಸ್ತರಣೆ

ಆದ್ದರಿಂದ ಎಲ್ಲರ ಕಣ್ಣುಗಳನ್ನೂ ಈ ಕಡೆ ತಿರುಗಿಸುವ ಸಲುವಾಗಿ ಆಮರಣಾಂತ ಉಪವಾಸ ಸತ್ಯಾಗ್ರಹ; ಜಿ. ಎಸ್. ನಾಗರಾಜ್‌ರವರ ಮನೆ ಹೊರಗೆ, ಒಳಗೆ ಶಾಂತಿಯುತ ಸತ್ಯಾಗ್ರಹ; ಹಾಗೂ ಕೆ. ಬಿ. ಶಿವಯ್ಯ ವೆಂಕಟರಮಣರವರ ಮನೆಗಳ ಮುಂದಕ್ಕೆ ವಸತಿಹೀನರ ಚಳುವಳಿಯನ್ನು ಹಂತಹಂತವಾಗಿ ವಿಸ್ತರಿಸುವೆವು. ಈಗ ನಮ್ಮ ಬೆನ್ನೆಲುಬಾಗಿ ದಲಿತ ಸಂಘರ್ಷ ಸಮಿತಿಯಿದೆ. ಜೊತೆಗೆ ಇದಕ್ಕೆ ರಾಜ್ಯದ ಪ್ರಗತಿಪರ ಪಕ್ಷಗಳು, ವ್ಯಕ್ತಿಗಳು ನೊಂದವರು, ಎಲ್ಲರೂ ಪ್ರತಿಕ್ರಿಯೆ ವ್ಯಕ್ತಪಡಿಸಿ ಕೈಲಾದಂತೆ ಪಾಲ್ಗೊಳ್ಳಬೇಕೆಂದು ತಗಡೂರಿನ ಅಂಬೇಡ್ಕರ್ ಯುವಕ ಸಂಘದ ಅಧ್ಯಕ್ಷರು ಮತ್ತು ಹೋರಾಟಕ್ಕಿಳಿದಿರುವ ಹರಿಜನರು ಈ ಮೂಲಕ ಕೋರಿದ್ದಾರೆ.

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3 ಇಲ್ಲಿ ಮುದ್ರಿಸಲ್ಪಟ್ಟು ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು. ವಿಳಾಸ : 5ಎ ವಾಣಿ ವಾಣಿಜ್ಯಶಾಲಾ, ಪತ್ರಕರ್ತರ ಕಾಲೋನಿ. ಬೆಂಗಳೂರು-560002.